## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 827
ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ
ಉತ್ತರಿಸುವ ದಿನಾಂಕ : 15-12-2020
ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಇಲಾಖೆಯಲ್ಲಿ ವಿವಿಧ ವೃಂದಗಳ ಮಂಜೂರಾಗಿರುವ, ಭರ್ತಿಯಾಗಿರುವ ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಮಂಜೂರಾಗಿರುವ ಹುದ್ದೆಗಳು 2657 ಅದರಲ್ಲಿ 1118 ಹುದ್ದೆಗಳು ಭರ್ತಿಯಾಗಿದ್ದು, 1539 ಹುದ್ದೆಗಳು ಖಾಲಿ ಇರುತ್ತದೆ.<br><br>ವಿವರಗಳು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಆ) | ರಾಜ್ಯದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿಗೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಹುದ್ದೆಯ ಪ್ರಭಾರವನ್ನು ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಆದೇಶದ ಪ್ರತಿಯೊಂದಿಗೆ ವಿವರ ನೀಡುವುದು. | ಬಂದಿದೆ.<br><br>ಸಹಕಾರ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದಕ್ಕೆ ಒಟ್ಟು 167 ಹುದ್ದೆಗಳೂ ಮಂಜೂರಾಗಿದ್ದು, ಅದರಲ್ಲಿ 83 ಹುದ್ದೆಗಳು ಖಾಲಿ ಇರುತ್ತದೆ. ಹುದ್ದೆಗಳು ಖಾಲಿ ಇರುವುದರಿಂದ ಇಲಾಖೆಯ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುವ ಸಂಬಂಧ ಆಡಳಿತಾತ್ಮಕ ಹಿತದೃಷ್ಟಿಯಿಂದ ಸಹಕಾರ ಅಭಿವೃದ್ಧಿ ಅಧಿಕಾರಿಗಳಿಗೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಹುದ್ದೆಯ ಅಧಿಕ ಪ್ರಭಾರವನ್ನು ನೀಡಲಾಗಿರುತ್ತದೆ. |
| ಇ) | ಈ ರೀತಿಯಾಗಿ ಅವರಿಗೆ ಹೆಚ್ಚುವರಿ ಪ್ರಭಾರ ನೀಡಲು ಹಾಗೂ ಹುದ್ದೆಯ ಅಧಿಕಾರ ಚಲಾಯಿಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ-1959 ರಲ್ಲಿ ಅವಕಾಶ ಕಲ್ಪಿಸಲಾಗಿದೆಯೇ; ಹಾಗಾದಲ್ಲಿ ಯಾವ ಕ್ರಮವನ್ನು ಸರ್ಕಾರದಿಂದ ತೆಗೆದುಕೊಳ್ಳಲಾಗುವುದು; | ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 2(ಎ) ಮತ್ತು ಕಲಂ 2(5) ರಲ್ಲಿ ಅವಕಾಶ ಕಲ್ಪಿಸಲಾಗಿದೆ. |
| ಈ) | ಸಹಕಾರ ಸಂಘಗಳ ಸಹಾಯಕ ನಿಬಂಧಕರ ಹುದ್ದೆಯ ಹೆಚ್ಚಿನ ಪ್ರಭಾರ ನಿರ್ವಹಿಸುತ್ತಿರುವ ಎಷ್ಟು ಸಹಕಾರ ಅಭಿವೃದ್ಧಿ ಅಧಿಕಾರಿಗಳ ವಿರುದ್ಧ ಸರ್ಕಾರಕ್ಕೆ ದೂರುಗಳು ಸ್ವೀಕೃತಗವಾಗಿದೆ; ಹಾಗೂ ಅವರುಗಳ ಮೇಲೆ ಯಾವ ಕ್ರಮ ತೆಗೆದುಕೊಳ್ಳಲಾಗಿದೆ? (ವಿವರಗಳನ್ನು ಒದಗಿಸುವುದು) | ಶ್ರೀ ಸುನೀಲ್ ವಿ., ಸಹಕಾರ ಅಭಿವೃದ್ಧಿ ಅಧಿಕಾರಿ ಇವರ ವಿರುದ್ಧ ದೂರುಗಳು ಸ್ವೀಕೃತವಾಗಿರುತ್ತವೆ. ಈ ದೂರುಗಳ ಬಗ್ಗೆ ಕೂಲಂಕಷವಾಗಿ ವಿಚಾರಣೆ ನಡೆಸಿ ಸ್ಪಷ್ಟ ಅಭಿಪ್ರಾಯದೊಂದಿಗೆ ವರದಿ ಸಲ್ಲಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರಿಗೆ ನಿರ್ದೇಶಿಸಲಾಗಿದೆ. ಮುಂದುವರೆದು, ಸದರಿಯವರು ಹಾಸನ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಸಂಸ್ಥೆ (ಜನತಾ ಬಜಾರ್) ಇದರ ಆಡಳಿತ ಮಂಡಳಿ ಚುನಾವಣೆಯ ಸಂಬಂಧ ಚುನಾವಣಾ ಕರ್ತವ್ಯಗಳನ್ನು ನಿರ್ವಹಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳದ ಕಾರಣ ಈ ಕರ್ತವ್ಯಲೋಪಕ್ಕೆ ಸಂಬಂಧಿಸಿದಂತೆ ಸದರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರನ್ವಯ ಶಿಸ್ತು ಕ್ರಮ ಕೈಗೊಳ್ಳಲು ನಿಯಮಾನುಸಾರ ಕ್ರಮವಿಡಲಾಗಿದೆ. ಈ ಸಂಬಂಧ ಸದರಿಯವರಿಗೆ ಕಾರಣ ಕೇಳಿ ನೋಟೀಸ್ ಜಾರಿ ಮಾಡಲಾಗಿದೆ. |

ಸಂಖ್ಯೆ:ಸಿಒ 312 ಇಸಿಎ 2020

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 827 ಕ್ಕೆ

ಅನುಬಂಧ-1

| Sl No. | Name of the Post | Pay Scale | Posts sanctioned | Working Position | Vacancy Position |
|---|---|---|---|---|---|
| 1 | 2 | 3 | 4 | 5 | 6 |
| 1 | ಸಹಕಾರ ಸಂಘಗಳ ನಿಬಂಧಕರು | 1,38,500 | 1 | 1 | – |
| 2 | ಸಹಕಾರ ಸಂಘಗಳ ಅಪರ ನಿಬಂಧಕರು | 90500–123300 | 25 | 19 | 6 |
| 3 | ಸಹಕಾರ ಸಂಘಗಳ ಜಂಟಿ ನಿಬಂಧಕರು | 74400–109600 | 68 | 25 | 43 |
| 4 | ಸಹಕಾರ ಸಂಘಗಳ ಉಪ ನಿಬಂಧಕರು | 67550–104600 | 50 | 28 | 22 |
| 5 | ಸಹಕಾರ ಸಂಘಗಳ ಸಹಾಯಕ ನಿಬಂಧಕರು | 43100–83900 | 167 | 84 (10.ಸ.ಅ.ಅ. ಅಧಿಕಾರಿಗಳು ನಿ.32 ರಡಿ ಸ.ನಿ.ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ | 83 |
| 6 | ಸಹಾಯಕ ಅಭಿಯಂತರರು | 43100–83900 | 1 | – | 1 |
| 7 | ಸಹಾಯಕ ನಿರ್ದೇಶಕರು | 43100–83900 | 1 | 1 | – |
| 8 | ಸಹಾಯಕ ಲೆಕ್ಕಾಧಿಕಾರಿ | Deputation Post | 1 | – | 1 |
| 9 | ಸಹಕಾರ ಅಭಿವೃದ್ಧಿ ಅಧಿಕಾರಿ | 40900–78200 | 271 | 222 | 49 |
| 10 | ಅಧೀಕ್ಷಕರು | 37900–70850 | 91 | 90 | 1 |
| 11 | ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು | 33450–62600 | 254 | 100 | 154 |
| 12 | ಸಹಾಯಕ ಸಾಂಖ್ಯಿಕ ಅಧಿಕಾರಿ | Deputation Post | 1 | 0 | 1 |
| 13 | ಸಹಕಾರ ಸಂಘಗಳ ನಿರೀಕ್ಷಕರು | 27650–52650 | 510 | 57 | 453 |
| 14 | ಹಿರಿಯ ಲೆಕ್ಕಿಗ | Deputation Post | 3 | 3 | – |
| 15 | ಪ್ರಥಮ ದರ್ಜೆ ಸಹಾಯಕರು | 27650–52650 | 148 | 101 | 47 |
| 16 | ಶೀಘ್ರಲಿಪಿಗಾರರು | 27650–52650 | 48 | 10 | 38 |
| 17 | ಹಿರಿಯ ಬೆರಳಚ್ಚುಗಾರರು | 27650–52650 | 16 | 2 | 14 |
| 18 | ಬೆರಳಚ್ಚುಗಾರರು | 21400–42000 | 114 | 14 | 100 |
| 19 | ಹಿರಿಯ ವಾಹನ ಚಾಲಕರು | 27650–52650 | 16 | 13 | 3 |
| 20 | ವಾಹನ ಚಾಲಕರು | 21400–42000 | 66 | 5 | 61 |
| 21 | ದ್ವಿತೀಯ ದರ್ಜೆ ಸಹಾಯಕರು | 21400–42000 | 337 | 216 | 121 |
| 22 | ಜಾರಿಗಾರರು | | 80 | 30 | 50 |
| 23 | ಜವಾನರು | | 387 | 97 | 290 |
| 24 | ತೋಟಗಾರರು | 17000–28950 | 1 | – | 1 |
| | | ಒಟ್ಟು | 2657 | 1118 | 1539 |

ಸಹಕಾರ ಸಂಘಗಳ ಸಹಾಯಕ ನಿಬಂಧಕರು
(ಸಿಬ್ಬಂದಿ)